# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 114 (83)

ಸದಸ್ಯರ ಹೆಸರು : ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮ ನಿರ್ದೇಶನ ಹೊಂದಿದವರು)

ಉತ್ತರಿಸುವ ದಿನಾಂಕ : 13.12.2021

ಉತ್ತರಿಸುವವರು : ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಯಾವ ಪ್ರದೇಶದಲ್ಲಿ ಗ್ರೇಟ್ ಇಂಡಿಯನ್ ಬಸ್ಟರ್ಡ್ ಹದ್ದುಗಳ ತಾಣಗಳಿವೆ; (ಜಿಲ್ಲಾವಾರು ಮತ್ತು ತಾಲ್ಲೂಕು ಒಳಗೊಂಡಂತೆ ಸಂಪೂರ್ಣ ವಿವರ ನೀಡುವುದು) | ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲ್ಲೂಕಿನ ಬಸರಹಳ್ಳಿ, ಅಗಸನೂರು, ಮಿಟ್ಟೇಸಿಗೂರು ಮುಂತಾದ ಗ್ರಾಮಗಳು ಗ್ರೇಟ್ ಇಂಡಿಯನ್ ಬಸ್ಟರ್ಡ್ ಪಕ್ಷಿಗಳ ತಾಣಗಳಾಗಿವೆ. |
| ಆ) | ಈ ಹದ್ದುಗಳು ತಾಣಗಳಲ್ಲಿ ಖಾಯಂ ಆಗಿ ನೆಲೆಸುತ್ತಿವೆಯೇ; ಅಥವಾ ಬೇರೆ ರಾಜ್ಯ ಮತ್ತು ರಾಷ್ಟ್ರಗಳಿಂದ ವಲಸೆ ಬರುತ್ತಿವೆಯೇ; (ಹಾಗಿದ್ದಲ್ಲಿ, ಋತುಮಾನ ಮತ್ತು ವಿವಿಧ ವರ್ಗದ ಹದ್ದುಗಳ ಒಳಗೊಂಡಂತೆ ಸಂಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ರಾಜ್ಯದ ಗಡಿಭಾಗದ ಸಿರುಗುಪ್ಪ ಪ್ರದೇಶ ಸೇರಿದಂತೆ, ಉತ್ತರ ಕರ್ನಾಟಕ ಮತ್ತು ಮಹಾರಾಷ್ಟ್ರ ರಾಜ್ಯಗಳಿಂದ ಹಾಗೂ ನೆರೆಯ ಆಂಧ್ರ ಮತ್ತು ತೆಲಂಗಾಣ ರಾಜ್ಯಗಳಿಂದ ವಲಸೆ ಬರುತ್ತಿವೆ. |
| ಇ) | ಈ ಹದ್ದುಗಳ ಬಗ್ಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಮೀಕ್ಷೆ ಮತ್ತು ಅಧ್ಯಯನ ನಡೆಸಿವೆಯೇ: (ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯ ಸರ್ಕಾರವು ಸದರಿ ಪಕ್ಷಿಗಳ ಸಮೀಕ್ಷೆ ಮತ್ತು ಅಧ್ಯಯನ Salim Ali Centre for Ornithology and Natural History, Coimbatore (SACON) ಎಂಬ ಸಂಸ್ಥೆಗೆ ವಹಿಸಿದ್ದು, ಸದರಿ ಸಂಸ್ಥೆಯು ಈ ಕೆಳಕಂಡ ಅಧ್ಯಯನ ಕೈಗೊಂಡಿರುತ್ತದೆ.<br><br>Conservation of Great Indian Bustard *Ardeotis nigriceps* in Karnataka:<br><br>Phase-I. Evaluating the population and ecological requirement of GIB in selected locations in Karnataka with special emphasis to Bellary Landscape ಎಂಬ ಶೀರ್ಷಿಕೆಯಡಿ ಅಧ್ಯಯನ ನಡೆಸಲಾಗುತ್ತಿದೆ. |

.......2

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಈ) | ಈ ಹದ್ದುಗಳ ಸಂತತಿ ಕ್ಷೀಣಿಸಲು ಕಾರಣವೇನು ಮತ್ತು ಇವುಗಳ ಸಂರಕ್ಷಣೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಕೈಗೊಂಡಿರುವ ಕ್ರಮಗಳು ಅಥವಾ ಯೋಜನೆಗಳಾವುವು? | ಸದರಿ ಪಕ್ಷಿಗಳಿಗೆ ಅವಶ್ಯವಿರುವ ಕೃಷಿ ಬೆಳೆಯಲ್ಲಿ ಬದಲಾವಣೆಯಾಗಿರುವುದರಿಂದ, ಭೂ ಬಳಕೆಯ ಬದಲಾವಣೆಗಳಿಂದ ಮತ್ತು ಅತಿ ಹೆಚ್ಚಿನ ವೋಲ್ಟೇಜ್ ಹೊಂದಿರುವಂತಹ ವಿದ್ಯುತ್ ಲೈನ್‌ಗಳ ತೊಂದರೆಯಿಂದ ಸದರಿ ಪಕ್ಷಿಗಳು ಕ್ಷೀಣಿತಗೊಂಡಿರುತ್ತವೆ. ಇವುಗಳ ಸಂರಕ್ಷಣೆಗೆ ಕೈಗೊಂಡಿರುವ ಕ್ರಮಗಳು ಮತ್ತು ಯೋಜನೆಗಳ ಕುರಿತು ವಿವರಗಳು ಈ ಕೆಳಗಿನಂತಿವೆ.<br>1) ಮಾನ್ಯ ಸರ್ವೋಚ್ಚ ನ್ಯಾಯಾಲಯದ ಆದೇಶದ ಪ್ರಕಾರ ಮೇಲ್ಕಂಡ ಪಕ್ಷಿಗಳ ಸಂರಕ್ಷಣೆ ಮತ್ತು ಅಭಿವೃದ್ಧಿಗೆ ಸಂಬಂಧಿಸಿದಂತೆ ರಚಿಸಲಾದ ಸಲಹಾ ಸಮಿತಿಯ ಸದಸ್ಯರು ಮತ್ತು ಇಲಾಖಾ ಅಧಿಕಾರಿಗಳು ಒಳಗೊಂಡಂತೆ ಆಗಾಗ್ಗೆ ಸಭೆಗಳನ್ನು ಜರುಗಿಸಲಾಗುತ್ತಿದೆ.<br>2) ಸದರಿ ಪಕ್ಷಿಗಳ ಸಂರಕ್ಷಿತ ಪ್ರದೇಶದಲ್ಲಿ ಕಳ್ಳಬೇಟೆಯಾಗದಂತೆ ಇಲಾಖಾ ಸಿಬ್ಬಂದಿಗಳು ಗಸ್ತು ಕಾರ್ಯವನ್ನು ನಿರ್ವಹಿಸಲು ಕ್ರಮ ಕೈಗೊಳ್ಳುತ್ತಾರೆ.<br>3) ಪಕ್ಷಿಗಳ ಚಲನವಲನ ಮತ್ತು ಇತರೆ ಚಟುವಟಿಕೆಗಳ ಕುರಿತು ವೈಜ್ಞಾನಿಕ ವೀಕ್ಷಣೆಯನ್ನು ಕೈಗೊಳ್ಳಲಾಗುತ್ತಿದೆ.<br>4) ಪಕ್ಷಿಗಳ ಪ್ರದೇಶದಲ್ಲಿದ್ದ ಪೊದೆಗಳನ್ನು ಮತ್ತು ಅನಗತ್ಯ ಕಳೆಗಳನ್ನು ತೆಗೆಯಲಾಗುತ್ತಿದೆ.<br>5) ಸಾರ್ವಜನಿಕರಿಂದ ಅಕ್ರಮ ಒತ್ತುವರಿಯಾಗದಂತೆ ಮತ್ತು ಸದರಿ ಪಕ್ಷಿಗಳ ಮತ್ತು ಇತರ ವನ್ಯ ಪ್ರಾಣಿಗಳ ರಕ್ಷಣೆಗಾಗಿ ಇಲಾಖಾ ಜಮೀನಿನ ಸುತ್ತ ಜಾನುವಾರು ತಡೆ ಕಂದಕಗಳನ್ನು ನಿರ್ಮಾಣ ಮಾಡಲಾಗುತ್ತಿದೆ.<br>6) ಕಳ್ಳಬೇಟೆ ತಡೆ ಶಿಬಿರಗಳನ್ನು ನಿರ್ಮಾಣ ಮಾಡಿ ಕಾವಲುಗಾರರನ್ನು ನೇಮಿಸಲಾಗುತ್ತಿದೆ.<br>7) ಪಕ್ಷಿಗಳಿಗಾಗಿ ಸೂರ್ಯಕಾಂತಿ, ಕಡಲೆ ಕಾಳು ಮತ್ತು ಹತ್ತಿಯನ್ನು ಬೆಳೆಸಲಾಗುತ್ತಿದೆ.<br>8) ಸುತ್ತ-ಮುತ್ತ ಗ್ರಾಮಸ್ಥರಿಗೆ ಸದರಿ ಪಕ್ಷಿಗಳ ಮತ್ತು ಇತರೆ ವನ್ಯ ಪ್ರಾಣಿಗಳ ಕುರಿತು ಅರಿವು ಮೂಡಿಸಲು ಕಾರ್ಯಕ್ರಮಗಳನ್ನು ಜರುಗಿಸಲಾಗುತ್ತಿದೆ.<br>9) ಪಕ್ಷಿಗಳ ಚಲನವಲನಗಳನ್ನು ಗಮನಿಸಲು ಮತ್ತು ಅಧ್ಯಯನ ಮಾಡಲು ವಿವಿಧ ಸಾಧನ ಸಾಮಗ್ರಿಗಳನ್ನು (ಬೈನಾಕುಲರ್, ಜಿಪಿಎಸ್ ಉಪಕರಣ, ಸ್ಪಾಟಿಂಗ್ / ಫೀಲ್ಡ್ ಸ್ಕೋಪ್‌ಗಳು, ಕ್ಯಾಮರ ಮತ್ತು ಇತರೆ) ಖರೀದಿಸಲಾಗುತ್ತಿದೆ.<br>10) ಬಳ್ಳಾರಿ ಅರಣ್ಯ ವಿಭಾಗದ ಅಧಿಕಾರಿಗಳು ಮತ್ತು ನೆರೆ ರಾಜ್ಯವಾದ ಆಂಧ್ರಪ್ರದೇಶದ ಕರ್ನೂಲು ಅರಣ್ಯ ವಿಭಾಗದ ಅಧಿಕಾರಿಗಳು ಒಳಗೊಂಡಂತೆ ಅಂತರ್‌ರಾಜ್ಯದ ಸಮನ್ವಯ ಸಭೆಗಳನ್ನು ಜರುಗಿಸಲಾಗುತ್ತಿದೆ.<br>11) ಆಂಧ್ರ ಪ್ರದೇಶದ ಕರ್ನೂಲು ಅರಣ್ಯ ವಿಭಾಗದಲ್ಲಿರುವ ರೋಲಪಾಡ್ ಗ್ರೇಟ್ ಇಂಡಿಯನ್ ಬಸ್ಟರ್ಡ್ ಪಕ್ಷಿಧಾಮಕ್ಕೆ ಇಲಾಖೆಯ ಸಿಬ್ಬಂದಿಗಳಿಂದ ಸಂದರ್ಶಿಸಲಾಗುತ್ತಿದೆ. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಉ) | ಈ ಹಕ್ಕಿಗಳ ಸಂತತಿ ಸಂರಕ್ಷಣೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಪಕ್ಷಿ ಸಂರಕ್ಷಕರು ಹಾಗೂ ಸಂಸ್ಥೆಗಳೊಂದಿಗೆ ಕೈಜೋಡಿಸಿ ಯೋಜನೆಗಳನ್ನು ರೂಪಿಸಲು ಮುಂದಾಗುವುದೆ? (ಸಂಪೂರ್ಣ ಮಾಹಿತಿ ನೀಡುವುದು | ಮಾನ್ಯ ಸರ್ವೋಚ್ಚ ನ್ಯಾಯಾಲಯದ ಆದೇಶದ ಪ್ರಕಾರ ಮೇಲ್ಕಂಡ ಪಕ್ಷಿಗಳ ಸಂತತಿ ಸಂರಕ್ಷಣೆ ಮತ್ತು ಅಭಿವೃದ್ಧಿಗೆ ಸಂಬಂಧಿಸಿದಂತೆ ಸಲಹಾ ಸಮಿತಿ ರಚಿಸಲಾಗಿದೆ. ಸಲಹಾ ಸಮಿತಿಯ ಸದಸ್ಯರು ಒಳಗೊಂಡ ತಂಡವೊಂದು ರಾಜಸ್ಥಾನಕ್ಕೆ ಹಾಗೂ ಭಾರತೀಯ ವನ್ಯಜೀವಿ ಸಂಸ್ಥೆಗೆ ಕಳುಹಿಸಲು ಕ್ರಮ ಕೈಗೊಳ್ಳಲಾಗುತ್ತಿದ್ದು, ಸಮನ್ವಯ ಮತ್ತು ಸಲಹೆಗಳೊಂದಿಗೆ ಮೇಲ್ಕಂಡ ಪಕ್ಷಿಗಳ ಸಂರಕ್ಷಿತ ಪ್ರದೇಶದಲ್ಲಿ ವಿವಿಧ ಅಭಿವೃದ್ಧಿ ಕಾಮಗಾರಿಗಳನ್ನು ಪ್ರಸಕ್ತ ಸಾಲಿನಲ್ಲಿ ಕೈಗೊಳ್ಳಲಾಗುತ್ತಿದೆ.<br><br>ಕೇಂದ್ರ ಸರ್ಕಾರವು Recovery programme for saving critically endangered species ಯೋಜನೆಯಡಿಯಲ್ಲಿ ಗ್ರೇಟ್ ಇಂಡಿಯನ್ ಬಸ್ಟರ್ಡ್‌ಗಳ ಸಂರಕ್ಷಣೆಗೆ ಅಗತ್ಯವಾದ ಆರ್ಥಿಕ ನೆರವನ್ನು ನೀಡಲಾಗುತ್ತಿದ್ದು, ಪ್ರಸ್ತುತ ವರ್ಷದಲ್ಲಿ ಕೇಂದ್ರ ಸರ್ಕಾರದಿಂದ ಒಟ್ಟು ರೂ.40.36934 ಲಕ್ಷಗಳ ವಾರ್ಷಿಕ ಕ್ರಿಯಾ ಯೋಜನೆಗೆ ಮಂಜೂರಾತಿ ನೀಡಲಾಗಿದೆ. |

ಸಂಖ್ಯೆ: ಅಪಜೀ 217 ಎಫ್‌ಡಬ್ಲ್ಯೂಎಲ್ 2021

(ಉಮೇಶ್ ವಿ. ಕತ್ತಿ)
ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಸಚಿವರು